ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 17 ನೇ ಮಾರ್ಚ್, 2020

ಸ್ಮಾರ್ಟ್ ಸಿಟಿ ಯೋಜನೆ

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

1053 (1274) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕೇಂದ್ರ ಸರ್ಕಾರದ ಮಹತ್ವಾಕಾಂಕ್ಷೆಯ ಸ್ಮಾರ್ಟ್‌ಸಿಟಿ ಯೋಜನೆಯು ರಾಜ್ಯದಲ್ಲಿ ಸಮರ್ಪಕವಾಗಿ ಅನುಷ್ಠಾನಗೊಳ್ಳದಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಬಂದಿದ್ದಲ್ಲಿ, ರಾಜ್ಯದಲ್ಲಿ ಸ್ಮಾರ್ಟ್‌ಸಿಟಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮತ್ತು ತ್ವರಿತಗತಿಯಲ್ಲಿ ಪೂರ್ಣಗೊಳಿಸಲು ಸರ್ಕಾರವು ತೆಗೆದುಕೊಂಡ ಕ್ರಮಗಳಾವುವು ; ವಿಳಂಬಕ್ಕೆ ಹೊಣೆಗಾರರು ಯಾರು ಹಾಗೂ ವಿಳಂಬಕ್ಕೆ ಕಾರಣಗಳೇನು ; (ವಿವರ ನೀಡುವುದು)

(ಇ) ಸದರಿ ಯೋಜನೆಯಡಿ ರಾಜ್ಯದಲ್ಲಿ ಯಾವ ಯಾವ ನಗರಗಳು ಆಯ್ಕೆಯಾಗಿವೆ ; ಇವುಗಳಿಗೆ ತಗಲುವ ಒಟ್ಟು ವೆಚ್ಚವೆಷ್ಟು ;

(ಈ) ರಾಜ್ಯದಲ್ಲಿನ ಸ್ಮಾರ್ಟ್‌ಸಿಟಿ ಯೋಜನೆಯ ಒಟ್ಟು ವೆಚ್ಚದಲ್ಲಿ ರಾಜ್ಯದ ಮತ್ತು ಕೇಂದ್ರ ಸರ್ಕಾರದ ಪಾಲು ಎಷ್ಟೆಷ್ಟು ; ಈಗಾಗಲೇ ಎಷ್ಟು ಅನುದಾನ ನೀಡಲಾಗಿದೆ ; (ವಿವರ ನೀಡುವುದು)

(ಉ) ಬೆಳಗಾವಿ ನಗರಕ್ಕೆ ಸದರಿ ಯೋಜನೆಯಡಿ ಬಿಡುಗಡೆಯಾದ ಅನುದಾನವೆಷ್ಟು ; ಯೋಜನೆಯ ಅನುಷ್ಠಾನವು ಯಾವ ಹಂತದಲ್ಲಿದೆ ಮತ್ತು ಯೋಜನೆಯು ಯಾವ ಕಾಲಮಿತಿಯಲ್ಲಿ ಸಂಪೂರ್ಣ ಅನುಷ್ಠಾನಗೊಳ್ಳುವುದು ; (ವಿವರ ನೀಡುವುದು)

(ಊ) ಸಮಿತಿಯು ಈವರೆಗೆ ಎಷ್ಟು ಸಭೆಗಳನ್ನು ನಡೆಸಿದೆ ; ಸಮಿತಿ ಸದಸ್ಯರುಗಳು ಯಾರು ? (ವಿವರ ಒದಗಿಸುವುದು)